ವೇಮಗಲ್ ಸೋಮಶೇಖರ್.

# ೧೮೮೮ರಲ್ಲಿ ನಡೆದ ಪ್ರಥಮ ಮೈಸೂರು (ದಸರಾ) ವಸ್ತು ಪ್ರದರ್ಶನದಲ್ಲಿ ಚಿತ್ರದುರ್ಗ ಜಿಲ್ಲೆಯ ಪಾತ್ರ

೧೮೮೮ರಲ್ಲಿ ಮೈಸೂರು ಸಂಸ್ಥಾನದಲ್ಲಿ ಪಪ್ರಥಮವಾಗಿ ವಸ್ತು ಪ್ರದರ್ಶನವು ಅಕ್ಟೋಬರ್ ೧ರಿಂದ ಒಂದು ವಾರದ ಕಾಲ ಮೈಸೂರು ನಗರದಲ್ಲಿ ನಡೆಯಿತು. ಈ ಪ್ರದರ್ಶನಕ್ಕೆ ಪೂರ್ವಭಾವಿಯಾಗಿ ३४ ಜನರುಳ್ಳ ಒಂದು ಮುಖ್ಯ ಸಮಿತಿಯನ್ನು ಹಾಗೂ ಪ್ರತಿ ಜಿಲ್ಲೆಯಿಂದ ಸುಮಾರು ೧೫ ಜನರುಳ್ಳ ಜಿಲ್ಲಾ ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ಆಯಾ ಜಿಲ್ಲೆಯ ವಿವಿಧ ಇಲಾಖೆಯ ಮುಖ್ಯಸ್ಥರು, ಹಿರಿಯ ಉದ್ಯಮಿಗಳು ಜಮೀನ್ದಾರುಗಳು ಮುಂತಾದ ಪ್ರಮುಖ ವ್ಯಕ್ತಿಗಳನ್ನು ಸದಸ್ಯರನ್ನಾಗಿ ನೇಮಿಸಿದರು. ಈ ರೀತಿಯಾಗಿ ಚಿತ್ರದುರ್ಗ ಜಿಲ್ಲೆಯಿಂದ ೧೪ ಸದಸ್ಯರುಳ್ಳ ಸಮಿತಿಯನ್ನು ರಚಿಸಿದರು.ಆಗ್ಗೆ ಚಿತ್ರದುರ್ಗ ಜಿಲ್ಲೆಯ ಡೆಪ್ಯುಟಿ ಕಮಿಷನರ್ ಆಗಿದ್ದಂಥ ಬಿ.ಆರ್. ವೆಂಕಟ ವರದ ಅಯ್ಯಂಗಾರ್ ಅವರನ್ನು ಅಧ್ಯಕ್ಷರನ್ನಾಗಿಯೂ ಅಸಿಸ್ಟೆಂಟ್ ಕಮೀಷನರ್ ಆಗಿದ್ದಂತ ಜಿ. ರಘುನಾಥರಾವ್ ಅವರನ್ನು ಉಪಾಧ್ಯಕ್ಷರನ್ನಾಗಿಯೂ ನೇಮಿಸಲಾಯಿತು.

ಸದಸ್ಯರುಗಳು.

(೧) ಮೆರ್ವಿನ್ ಸ್ಮಿತ್ (ಭೂಗರ್ಭ ಶಾಸ್ತ್ರಜ್ಞರು) (೨) ಎ. ರಂಗರಾವ್. (೩) ಎಮ್. ಎ. ತಿರುನಾರಾಯಣಾಚಾರ್. (೪) ವೈದ್ಯನಾಥ ಶಾಸ್ತ್ರಿ (ಅಸಿಸ್ಟೆಂಟ್ ಸರ್ಜನ್) (೫) ಎಮ್.ಬಿ. ಶ್ರೀನಿವಾಸಅಯ್ಯಂಗಾರ್. (೬) ಎಮ್. ಅನಂತ ಶೆಟ್ಟಿ. (೭) ಮಹಮದ್ ಇಸಾಕ್ ಸಾಹೇಬ್ (೮) ರಂಗಸ್ವಾಮಿ ಅಯ್ಯಂಗಾರ್ (೯) ಜಿ.ಸಿ. ಬಾಲ್ (೧೦) ರಾಘವೇಂದ್ರರಾವ್ (ಬ್ಯಾಂಕ್ ಏಜೆಂಟ್) (೧೧) ಕಾಶಿ ಅಪ್ಪಣ್ಣ (ಶ್ರೀಮಂತರು ಹಾಗೂ ದಾನಿಗಳು) (೧೨) ಗುಲ್ ಬಾಷಾ (೧೩) ಬಿ. ನಾರಾಯಣ ಅಯ್ಯಂಗಾರ್ (೧೪) ಎ.ಟಿ. ದಲಾಲ್ (ಅಮಲ್ದಾರ್)

ಈ ಸದಸ್ಯರುಗಳು ತಮ್ಮ ಜಿಲ್ಲೆಯಿಂದ ವಸ್ತು ಪ್ರದರ್ಶನದಲ್ಲಿ ಯಾರಾರು ಬಾಗವಹಿಸಿ ಯಾವ ಯಾವ ವಸ್ತುಗಳನ್ನು ಪ್ರದರ್ಶಿಸಬಹುದು ಎಂಬುದನ್ನು ಆಯ್ಕೆ ಮಾಡಿ ಅಲ್ಲಿಗೆ ವಸ್ತುಗಳೊಡನೆ ಭಾಗವಹಿಸಲು ಸೂಕ್ತ ಏರ್ಪಾಟನ್ನು ಮಾಡಿದರು. ಸಮಿತಿಯಲ್ಲಿದ್ದ ಸದಸ್ಯರೂ ಸಹ ಕೆಲವರು ಪ್ರದರ್ಶನದಲ್ಲಿ ಭಾಗವಹಿಸಿದ್ದರು.

ದುರ್ಗದ ಬಾಲಕಿಯರ ಶಾಲೆಯಿಂದ ಕೆಲವು ಹೆಣ್ಣು ಮಕ್ಕಳು ಬಟ್ಟೆಯ ಮೇಲೆ ಕಸೂತಿ ಕುಶಲಕಲೆಯನ್ನು ಪ್ರದರ್ಶಿಸಿದರು. ಇವರುಗಳಲ್ಲಿ ೭ ವರ್ಷದ ಬಾಲಕಿಯೊಬ್ಬಳು ಕ್ರೋಶಕಡ್ಡಿಯಿಂದ ಹಾಕಿದ ಕಲಾತ್ಮಕ ಕುಶಲತೆಯ ಪ್ರದರ್ಶನವನ್ನು ತೀರ್ಪುಗಾರರು ಬಹಳ ಮೆಚ್ಚಿ ವಿಶೇಷ ಬಹುಮಾನವನ್ನು ನೀಡಿದರು.

ದುರ್ಗದ ಚಿತ್ರಗಾರ ತಿಪ್ಪಯ್ಯ ಎಂಬುವರು ಶಿಲ್ಪಗಳನ್ನು ಪ್ರದರ್ಶಿಸಿ ದ್ವಿತೀಯ ಬಹುಮಾನ ೨೦ ರೂಗಳನ್ನು ಪಡೆದರು.

ದುರ್ಗದಲ್ಲಿ ಅಸಿಸ್ಟೆಂಟ್ ಸರ್ಜನ್ ಹಾಗೂ ಸಮಿತಿ ಸದಸ್ಯರೂ ಆಗಿದ್ದ ವೈದ್ಯನಾಥ ಶಾಸ್ತ್ರಿಗಳು ವೈದ್ಯಕೀಯಕ್ಕೆ ಸಂಬಂಧ ಪಟ್ಟಂತ ಸಸ್ಯಗಳು ಮತ್ತು ಬೇರುಗಳನ್ನು ಪ್ರದರ್ಶಿಸಿ ಮೆಚ್ಚಿಗೆ ಬಹುಮಾನವನ್ನು ಪಡೆದರು.

ದುರ್ಗದ ಎಮ್ಮೆಹಟ್ಟಿ ಕಳಸಪ್ಪನವರ ರಂಗಪ್ಪ ಅವರು ಪ್ರದರ್ಶಿಸಿದ ಕಪ್ಪು ಕಂಬಳಿ ಮತ್ತು ಹಳದಿ ರೇಷ್ಮೆ ಚೌಕಳಿ ಕಂಬಳಿಗಳು ತೀರ್ಪುಗಾರರಿಂದ ಮೆಚ್ಚಿಗೆ ಪಡೆದು ೨೫ ರೂ.ಗಳ ವಿಶೇಷ ಬಹುಮಾನವನ್ನು ಪಡೆದರು.

ಸಮಿತಿಯ ಸದಸ್ಯರಾಗಿದ್ದಂತ ಮಿ.ಮೆರ್ವಿನ್‌ಸ್ಮಿತ್ ಅವರು ಪ್ರದರ್ಶಿಸಿದ್ದ ಬೆಳ್ಳಿಯ ಅದುರಿಗೆ ೧೦ರೂ.ಗಳ ಬಹುಮಾನ ಮತ್ತು ಕಬ್ಬಿಣದ ಅದುರಿಗೆ ವಿಶೇಷ ಬಹುಮಾನವಾಗಿ ತಾಮ್ರದ ಪದಕವನ್ನು ಪಡೆದರು. ಓವರ್‌ಸೀರ್ ಆಗಿದ್ದಂತ ಆನಂದರಾವ್ ಅವರುಕಬ್ಬಿಣ ತಯಾರು ಮಾಡುವ ವಿವಿಧ ಹಂತಗಳನ್ನು ಪ್ರದರ್ಶಿಸಿ೫ ರೂ.ಗಳ ವಿಶೇಷ ಬಹುಮಾನ ಪಡೆದರು.

ಕಮ್ಮಾರ ವೃತ್ತಿಯನ್ನು ಮಾಡುತ್ತಿದ್ದ ದಾನಪ್ಪ ಎಂಬುವರು ತಾವೇ ತಯಾರು ಮಾಡಿದ ಬೀಗವನ್ನು 'ಗನ್ ಲಾಕ್' ಪ್ರದರ್ಶಿಸಿ ३ ರೂ. ಬಹುಮಾನವನ್ನು ಪಡೆದರು. ಅದೇ ರೀತಿ ದುರ್ಗದಲ್ಲಿ ಮರಗೆಲಸ ಮಾಡುತ್ತಿದ್ದ ಹೊಸೂರಪ್ಪ ಎಂಬುವರು ಪ್ರದರ್ಶಿಸಿದ

ಹಿತ್ತಾಳೆಯ ಬೀಗಕ್ಕೆ ೧೦ರೂ.ಗಳ ಬಹುಮಾನ ದೊರೆಯಿತು.

ಶ್ರೀಮಂತರು ಮಾತ್ರ ಉಪಯೋಗಿಸುತ್ತಿದ್ದ ವೈಶಾಕೀ ಭತ್ತವನ್ನು ತೀರ್ಪುಗಾರರು ಮೆಚ್ಚಿ ೮ರೂ.ಗಳ ಪ್ರಥಮ ಬಹುಮಾನವನ್ನು ದಾವಣಗೆರೆಯ ನಂಜುಂಡ ರಾವ್ ಅವರು ಪಡೆದರು. ಇದೇ ರೀತಿಯ ಕಾರ್ತಿಕ ಭತ್ತವನ್ನು ಸಿದ್ದಾಪುರದ ಬಾಬುರಾವ್ ಎಂಬುವರು ಸಹ ಪ್ರದರ್ಶಿಸಿ ತೃತಿಯ ಬಹುಮಾನವಾಗಿ ೩ರೂ.ಗಳನ್ನು ಪಡೆದರು.

ಹದ ಮಾಡಿದ ಚರ್ಮ ಹಾಗೂ ಅದಕ್ಕೆ ಬೇಕಾದ ವಿವಿಧ ಸಲಕರಣೆಗಳನ್ನು ಪ್ರದರ್ಶಿಸಿದ ದುರ್ಗದ ಎ.ಎಮ್.ಸ್ಮಿತ್ ಮತ್ತು ಲಬ್ಬೆ ಗಫಾರ್ ಸಾಬ್ ಅವರಿಗೆ ತೃತಿಯ ಬಹುಮಾನವಾಗಿ ೧೫ರೂ.ಗಳನ್ನು ಪಡೆದರು.

## ಪ್ರದರ್ಶನವಾದ ವಿರಗಳು.

| ಸಂಖ್ಯೆ | ಹೆಸರು | ವಸ್ತು | ಬಹು | ರೂ. |
|---|---|---|---|---|
| 1. | ಹೊಸದುರ್ಗದ ಚಿಗಾರ | ತಾವೇತಯಾರು ಮಾಡಿದ ಕ್ರಮಗ್ಗದ ಬಟ್ಟೆಗಳು | ಪ್ರ. | 10 |
| 2. | ಹೊಸದುರ್ಗದ ಬಾಣವ | " | ತೃ. | 20 |
| 3. | ಮೊಳಕಾಲ್ಮೂರಿನ ದೇವಟ್ಟಿದೊಡ್ಡಯ್ಯ | " | ತೃ. | 15 |
| 4. | ಮೊಳಕಾಲ್ಮೂರಿನ ಕುಬಾಜಿ ದುರ್ಗಪ್ಪ | " | ದ್ವಿ. | 20 |
| 5. | ಮೊಳಕಾಲ್ಮೂರಿನ ವೀರಣ್ಣ | " | ಪ್ರ. | 30 |
| 6. | ದುರ್ಗದ ಬ್ಯಾಂಕ್ ಏಜೆಂಟ್ ಹಾಗೂ ಬಡ್ಡಿ ಏಜೆಂಟ್ ಆಗಿದ್ದಂತ ಸಿ.ರಾಘವೇಂದ್ರರಾವ್ | " | ದ್ವಿ. | 5 |
| 7. | ದುರ್ಗದ ತಿಮ್ಮರಾಶಿ ಭೀಮಯ್ಯ | " | ತೃ. | 3 |
| 8. | ದುರ್ಗದ ದಾಶಿ | " | ವಿ. | 2 |
| 9. | ಅನೇಕಲ್ ರಾಮಸ್ವಾಮಿ | " | ದ್ವಿ. | 10 |
| 10. | ಅನೇಕಲ್ ಚಿಕ್ಕಣ್ಣ | " | ತೃ | 3 |
| 11. | ಯಳಂದೂರಿನ ರಾಮಶೆಟ್ಟಿ | " | ವಿ. | 2 |
| 12. | ದೇವಸಂದ್ರದ ಹೀರಾಲ್ ಹಣ್ಣೂರ್ ಸಾಬ್ | " | ವಿ. | 2 |
| 13. | ದೇವಸಂದ್ರದ ಮಲ್ಲಿಕಾರ್ಜುನಪ್ಪಾ | " | ವಿ | 2 |
| 1. | ದುರ್ಗದ ಲಕ್ಕಿನ ಹನುಮಣ್ಣ | ವಿವಿಧ ಉಣ್ಣೆ ಕಂಬಳಿಗಳ ಪ್ರದರ್ಶನಕ್ಕೆ | ಪ್ರ. | 40 |
| 2. | ದುರ್ಗದ ಬಂಗಿ ಎಕ್ಕಪ್ಪ | " | ಪ್ರ. | 40. |
| 3. | ದುರ್ಗದ ಪ್ಲೀಡರ್ ರಾಘವೇಂದ್ರ ರಾವ್ | " | ತೃ. | 15. |
| | | **ಹತ್ತಿ ಪ್ರದರ್ಶನ.** | | |
| 1. | ಅಡ್ವಕೇಟ್ ಅಂನತ ಶೆಟ್ಟಿ | ಮೈಸೂರು ಹತ್ತಿ | ಪ್ರ. | 20 |
| 2. | ಮೆರ್ಸನ್ ಸ್ಮಿತ್ | ವಿದೇಶಿ ಹತ್ತಿ | ಪ್ರ. | 20 |
| 3. | ಬಿ.ಕೆ.ವೆಂಕಟ ವರದ ಅಯ್ಯಂಗಾರ್ | ಉಣ್ಣೇ ಮತ್ತು ಮೈಸೂರು ಹತ್ತಿ | ವಿ. | |



1988 ವಸ್ತು ಪ್ರದರ್ಶನದ ಪ್ರವೇಶ ದ್ವಾರ

| ಸಂಖ್ಯೆ | ಹೆಸರು | ವಸ್ತು | ಬಹು | ರೂ. |
|---|---|---|---|---|
| | | ಸಾಂಬಾರ ಪದಾರ್ಥಗಳು | | |
| 1. | ಹಿರಿಯೂರಿನ ಹನುಮಂತಯ್ಯ | **OMUN** | ಪ್ರ. | 5 |
| 2. | ದುರ್ಗದ ಪಟ್ಟಣಶೆಟ್ಟಿ ಮಹೇಶ್ವರಪ್ಪ | ಕಲ್ಲುಹೂ | ದ್ವಿ. | 3 |
| 3. | ದುರ್ಗದ ಕಾಟಪ್ಪ | ಮೆಂತ್ಯ | ವಿ. | |
| | | ಬಣ್ಣಗಳು – ರಂಗುಗಳು | | |
| 1. | ಚಿಕ್ಕನ ಹಳ್ಳಿ ಭೀಮ | ಮಡ್ಡೀ ಚಿಕ್ಕೆ | ದ್ವಿ | 10 |
| 2. | ಹೊಳಲ್‌ಕೆರೆಯ ಪ್ಯಾರ | ಮುತ್ತುಗ ಹೂವು | ಪ್ರ. | 20 |
| 3. | ಹೊಳಲ್‌ಕೆರೆಯ ಗೋಪಾಲಯ್ಯ | ಕೇರು ಬೀಜ | ಪ್ರ. | 15 |
| 4. | ಹಿರಿಯೂರಿನ ಪಟೇಲ್ ಬಸಪ್ಪಾ | **FARINALEOUS FEEDS** | ಪ್ರ. | 30 |
| | | **Hard Ware And Cutlery** | | |
| 1. | ಬಿ.ಕೇಶವ ಅಯ್ಯಂಗಾರ್ ಹೊಳಲ್‌ಕೆರೆ | ಕಬ್ಬಿಣ | ದ್ವಿ. | 10 |
| 2. | ಚಿಕ್ಕಣ್ಣ | ಸ್ಥಳೀಯ ಉಕ್ಕು | ಪ್ರ. | 20 |
| 3. | ಹಿರಿಯೂರಿನ ಕರಿಯಣ್ಣ | ಕಬ್ಬಿಣ | ಪ್ರ. | 15 |
| 4. | ಹೊಸದುರ್ಗದ ಶಿವಣ್ಣ | ಕಂಚು | ಪ್ರ. | 30 |
| | | ಧಾನ್ಯಗಳು | | |
| 1. | ದುರ್ಗದ ಮಲ್ಲಿಕಾಜಿ | ಹೊಲದ ರಾಗಿ | ದ್ವಿ. | 5 |
| 2. | ದುರ್ಗದ ತಿಮ್ಮಯ್ಯ | ಅಚ್ಚೆಳ್ಳು | ಪ್ರ. | 6 |
| 3. | ದುರ್ಗದ ಅಚ್ಚಪ್ಪ | ಹುಚ್ಚೆಳ್ಳು | ದ್ವಿ | 4 |
| 4. | ದುರ್ಗದ ಸುಬ್ಬರಾಮ ಶೆಟ್ಟಿ | ಕಡಲೆ | ಪ್ರ. | 5 |
| 5. | ದುರ್ಗದ ಕುಂಚಿಗುಂಟಲ ಬಸಪ್ಪ | ನವಣೆ | ದ್ವಿ. | 7 |
| 6. | ದುರ್ಗದ ಹನುಮಂತಪ್ಪಾ | ಅವರೆ | ದ್ವಿ. | 3 |
| 7. | ಚಿತ್ರದುರ್ಗ ಜಿಲ್ಲೆಯ ಮಠದ ಸೀತಾರಾಮಯ್ಯ | ಒಣಕೊಬರಿ | ದ್ವಿ | 4 |
| 8. | ಚಿತ್ರದುರ್ಗ ಶಾನುಬೋಗ್ ರಾಮಣ್ಣ | ತೊಗರಿ | ವಿ. | |
| 9. | ಚಿತ್ರದುರ್ಗ ಜಿಲ್ಲೆಯ ನಾಡಿಗ ದುಗ್ಗಪ್ಪ | ಹುರುಳಿ | ದ್ವಿ | 3 |
| 10. | ಚಿತ್ರದುರ್ಗ ಜಿಲ್ಲೆಯ ಚಿರಂತಪ್ಪ | ವಿವಿಧ ಬೆಳೆಗಳು | ದ್ವಿ | 3 |
| 11. | ಬೊಮ್ಮ ಗೊಂಡನ ಕೆರೆಯ ಪಟೇಲ್ ಮರಿಗೆಪ್ಪ | ತೋಟದ ರಾಗಿ | ತೃ. | 3 |
| 12. | ಜಗಳೂರಿನ ರಾಮಚಂದ್ರಪ್ಪ | ಬಿಳಿ ಜೋಳ | ಪ್ರ. | 7 |
| 13. | ಹುಣಿಸೇ ಕಟ್ಟೆಯ ಬೋರೇ ಗೌಡ | ಕೆಂಪು ಜೋಳ | ದ್ವಿ | 4 |
| 14. | ಗೊಣ್ಣೂರಿನ ಬಾಸನಾಯಕ | ಜವೆಗೋದಿ | ಪ್ರ. | 8 |
| 15. | ಬೈರಾವರದ ರಾಮನಾಯಕ್ | ಸಾಮೆ | ತೃ. | 2 |
| 16. | ಹಾಯಕಲ್ಲು ರಂಗಯ್ಯ | ಸಜ್ಜೆ | ದ್ವಿ. | 4 |
| 17. | ಗಂಗಸಮುದ್ರದ ವೆಂಕಟಸುಬ್ಬಯ್ಯ | ಬರಗು | ದ್ವಿ. | 4 |
| 18. | ಸಿದ್ದನ ಹಳ್ಳಿಯ ಭೀಮಯ್ಯ ಗೌಡ | ಅಚ್ಚೆಳ್ಳು | ದ್ವಿ. | 4 |
| 19. | ಚಳ್ಳಕೆರೆಯ ಪಟೇಲ್ ಭಾಸ್ಕರಪ್ಪ | ಹೊಂಗೆ ಬೀಜ | ತೃ. | 2 |
| 20. | ಚಳ್ಳಕೆರೆಯ ಮಠದ ಚನ್ನವೀರಪ್ಪ | ನಾರು | ತೃ. | 4 |
| 21. | ಹಿರಿಯೂರಿನ ಹುಚ್ಚಣ್ಣ | ಹೊಗೆಸೊಪ್ಪು | ವಿ. | - |
| 22. | ದುರ್ಗದ ಜಮೀನ್ದಾರ್ ಸಿ.ಭೀಮರಾವ್ | ಬಾಳೆಹಣ್ಣು | ವಿ. | |